ಕುಂ. ಬಾ. ಸದಾಶಿವಪ್ಪ
ಡಾ|| ರು. ಮ. ಷಡಕ್ಷರಯ್ಯ

# ಬಾಗಳಿ ಕಂಚಿನಪತ್ರ

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿಗೆ ಸೇರಿದ ಬಾಗಳಿ ಗ್ರಾಮದಲ್ಲಿ ಕಂಚಿನಪತ್ರವೊಂದು ಇತ್ತೀಚೆಗೆ ಪತ್ತೆಯಾಗಿದ್ದು, ಅದು ಬಾಗಳಿಯ ಕೆರೆ ನೀರು ಬಿಡುವ ಬಾರಿಕರ ಮನೆತನಕ್ಕೆ ಸೇರಿದ ಶ್ರೀ ಹಾಲಪ್ಪನವರ ಹತ್ತಿರ ಈ ಕಂಚಿನಪತ್ರ ಇರುತ್ತದೆ. ಸುಮಾರು ೭೦ ವರ್ಷಗಳ ಪೂರ್ವದಲ್ಲಿ ತಮ್ಮಲ್ಲಿದ್ದ ಒಂದು ಹಳೆಯ ಕೈಬರಹದ ಪತ್ರದ ಪಾಠವನ್ನು ತಮ್ಮ ತಂದೆಯವರು ಈ ಕಂಚಿನಪತ್ರದಲ್ಲಿ ಕೆತ್ತಿಸಿರುವುದಾಗಿ ಅವರು ಹೇಳಿರುವರು (ಕೈಬರಹದ ಪತ್ರ ಈಗ ಅವರಲ್ಲಿ ಉಳಿದಿಲ್ಲ). ಇಂತಹ ಕಂಚಿನಪತ್ರಗಳು ಈ ಪ್ರದೇಶದಲ್ಲಿ ದೊರಕುವುದು ವಿರಳ. ಇದರ ಉದ್ದ ೩೦ ಸೆಂ. ಮೀ., ಅಗಲ ೨೦ ಸೆಂ. ಮೀ. ಇರುತ್ತದೆ. ಮೇಲ್ಭಾಗದಲ್ಲಿ ರಂಧ್ರವನ್ನು ಮಾಡಲಾಗಿದೆ. ಇದರ ಭಾಷೆ ಮತ್ತು ಲಿಪಿ ಕನ್ನಡದಲ್ಲಿದ್ದು, ಇದರ ಪಾಠಕ್ರಮ ಹೀಗಿದೆ :

ಶ್ರೀ

ಕಂಚಿನಪತ್ರ

ನಮುಸ್ತುಂಗ ಸಿರಸ್ತುಂಗ ಚಂದ್ರ ಚಾಮರ ಚಾರ ವೆ ತ್ರೈಲೋಕ್ಯ ನಗಾರಂಭ ಮೂಲಸ್ಥಂಭಾಯ ಶಂಭವಿ ಸ್ವಸ್ತಿಶ್ರೀ ವಿಜಯಾಬ್ಯುದಯ ಶಾಲಿವಾಹನ ಶಕ ವರ್ಷಂಗಳ ೮೮೫ನೆಯ ಸೋಭಾನ ಕೃತು ಸಂವತ್ಸರದ ವೈಶಾಕ ಬಹುಳ ೨ರಲ್ಲೂ ರಾಜರಾಜಶ್ರೀ ಕರಿಕಾಲ ಖಂಡೇರಾಯರು ಬಾಗಿಲ ಕಾಯೋ ಗೊಲ್ಲರ ಗೋಪಾಲ ಗೌಡನಿಗೆ, ನಿರೂಪ ದಯಪಾಲಿಸಿದ್ದು ಯೇನೆಂದರೆ ಸದರೀ ಬಾಗಳೀ ಎಂದು ಹೆಸರಿಟ್ಟು ಹುಗ್ಗಿ ಹೊಯ್ದರು. ಇದಕ್ಕೆ ಆಯಗಾರ ಹಿರೇಯಸ್ತರು ಮೋಟಿ ಬಣಕಾರು ಶಾನಬೋಗರು ವೆಂಕಟಪತಿ ಪತ್ತಾರಿ ಕರಿಯಣ್ಣ ಅಗಸರ ಮಲ್ಲಂಣ ತಳವಾರ ಭೀಮಪ್ಪ ಚಲುವಾದಿ ಕಂಗಣಾ ಇಂತವರು ಆಯಗಾರರು ಗೌಡ್ಕಿ ಸ್ವಸ್ತಿ ಸ್ಥಿರಪಡಿಸಿದ್ದು ಕೆರೆ ಕಟ್ಟಿಸಿದ ನಾಣ್ಯ ೨೦೦೦-೦೦ ಯಿದಕ್ಕೆ ತಪ್ಪಬಾರದೆಂದು ಬರಕೊಟ್ಟ ದಾನಪತ್ರ ಸಹಿ ಯಿದರ ಕೆಳಗಳಹಳ್ಳಿ ಕೂಲಹಳ್ಳಿ-ಚಿಕ್ಕಲಗಣಕಟ್ಟೆ ಹಿರೆಕಲಗಳಕಟ್ಟೆ ನಾರಣಪುರ, ಹರಿಯಲ್ಲಾಪುರ ಶಿಳಗಣ್ಣ ಯಲ್ಲಪುರ ಸಿದ್ದಪುರ ಮಾದಾಪುರ ಯರಡೆತ್ತಿನಹಳ್ಳಿ ಮಿರನ್ನಳ್ಳಿ ಕನಕಾಪುರ ಹೊಡ್ಡಿನ ದಾದಪುರ ಮಾಡ್ಲಗೇರಿ ಹಿಟ್ಟಿನಹಳ್ಳಿ ಸಂಗೇನಹಳ್ಳಿ ಕಾನಹಳ್ಳಿ ವಿಟಲಾಪುರ ಕೋಡಿಹಳ್ಳಿ ಕೂಂಗನಸುರು ಶೃಂಗಾರತೋಟ ದಡಿಗೇರಹಳ್ಳಿ ಕಾಯಕದಹಳ್ಳಿ ಹೊಂಬಳಗಟ್ಟಿ ಯಿರಪ್ರ ಗಾಳಿಹಳ್ಳಿಯ ಮುವತ್ತು ಮೂರು ಗ್ರಾಮಗಳಿಗೆ ಮೇಲೆ ಬರೆದಿರುವ ಆಯಗಾರರು ಸ್ವಸ್ತಿ ಪಡೆದಿರುತ್ತಾರೆ. ಯಿವರು ಭಾದ್ಯರು ಯಿರುವರು. ಬಾಗಳಿ ಕಟ್ಟಿಮನೆಯವರು ಯಿನ್ನು ಯಿರತಕ್ಕ ಕಟ್ಟೆಗಳು ಬಾಗಳಿ ವಳಗೆ ಹರಪನಹಳ್ಳಿ ಕಸಬೆ ಯಿದರಂತೆ ಮೇಲೆ ಕಂಡ ಕರಿಕಾಲ ಖಂಡೇರಾಯರು ನಿರುಪ ಕೊಟ್ಟು ಸ್ಥಿರ ಪಡಿಸಿದರು.

ಈ ಪತ್ರದಲ್ಲಿ ಶಾಲಿವಾಹನ ಶಕವರ್ಷ ೮೮೫ ಶೋಭನ ಸಂವತ್ಸರದ ವೈಶಾಕ ಬಹುಳ ೧೨ರಲ್ಲಿ ಎಂದಿದ್ದು, ಅದು ಕ್ರಿ.ಶ. ೮೮೩ ಏಪ್ರಿಲ್ ೧೨ನೇ ಶುಕ್ರವಾರ ಆಗುತ್ತದೆ. ಈ ಸಮಯದಲ್ಲಿ ಖರೇ ಖಂಡೇ

ರಾಯನ ಬಾಗಿಲು ಕಾಯುವ ಗೊಲ್ಲರ ಗೋಪಾಲ ಗೌಡನು ಬಾಗಳಿ ಗ್ರಾಮವನ್ನು ಹುಗ್ಗಿ ಹೊಯ್ದು ಸ್ಥಾಪಿಸಿದನು ಎಂದು ಹೇಳಲಾಗಿದೆ. ಆರು ಜನ ಆಯಗಾರರ ಮೇಟಿ ಬಣಕಾರ, ಶಾನುಭೋಗರು, ಪತ್ತಾರಿ, ಅಗಸರು, ತಳವಾರ, ಚಲುವಾದಿಯರ ಉಲ್ಲೇಖವಿದೆ. ಇವರೆಲ್ಲ ಗ್ರಾಮದ ಹಿರಿಯರು. ಈ ಗ್ರಾಮದ ಕೆರೆ ನಿರ್ಮಾಣದ ವೆಚ್ಚ ೨೦೦೦ ನಾಣ್ಯಗಳೆಂದು ತಿಳಿಸಲಾಗಿದೆ. ಆದರೆ ಕೆರೆಯ ಬಗ್ಗೆ ಹೆಚ್ಚು ವಿವರಗಳಿಲ್ಲ. ಬಾಗಳಿಗೆ ೩೩ ಹಳ್ಳಿಗಳು ಸೇರಿದ್ದವೆಂದಿದೆ. ಈ ೩೩ ಹಳ್ಳಿಗಳಿಗೆ ಎರಡು ಕಟ್ಟಿಮನೆಗಳು ಇದ್ದುವೆಂದು ಕಾಣುತ್ತದೆ. ಇವು ಹರಪನಹಳ್ಳಿ ಮತ್ತು ಬಾಗಳಿಗೆ ಇದ್ದವು. ಹರಪನಹಳ್ಳಿಗೆ ಕಸಬೆ ಗ್ರಾಮವೆಂದು ತಿಳಿಸಿ ಅದು ಬಾಗಳಿಗೆ ಸೇರಿದ್ದಿತೆಂದು ಹೇಳಲಾಗಿದೆ. ಇಂತಹ ಕಟ್ಟಿಮನಿಗಳ ಅಸ್ತಿತ್ವ ಈ ಭಾಗದಲ್ಲಿ ಈಗಲೂ ಇರುವುದನ್ನು ಕಾಣುತ್ತೇವೆ. ಈ ಹಳ್ಳಿಗಳ ಆಯಗಾರರ ಮತ್ತು ಕಟ್ಟಿಮನಿಗಳ ವ್ಯವಸ್ಥೆಗೆ ಖರೇ ಖಂಡೇರಾಯರು ಒಪ್ಪಿಗೆ ನೀಡಿದ ಉಲ್ಲೇಖವಿದ್ದು, ಇದರ ಐತಿಹಾಸಿಕ ಕತೆಯನ್ನು ಈ ಕೆಳಗೆ ಚರ್ಚಿಸಲಾಗಿದೆ.

ಸುಮಾರು ಎರಡು ಶತಮಾನಕ್ಕೂ ಹೆಚ್ಚು ಕಾಲ ರಾಜ್ಯವಾಳಿದ ಹರಪನಹಳ್ಳಿ ಪಾಳೇಗಾರರ ಇತಿಹಾಸ ವಾಗಿ ಈ ವರೆಗೂ ದೊರೆತಿಲ್ಲ. ಈ ರಾಜಮನೆತನದಲ್ಲಿ ೧೬ ಜನರು ಆಳಿದರು. ಈ ವಂಶದ ಮೊದಲ ಅರಸ ದಾದಯ್ಯನಾಯಕ. ಇವನು ಬಾಗಳಿಯಿಂದ ಹರಪನಹಳ್ಳಿಗೆ ಬಂದು ತನ್ನ ರಾಜ್ಯವನ್ನು ವಿಸ್ತರಿಸುವ ಮುನ್ನ ಗೊಲ್ಲರ ಗೋಪಾಲಗೌಡನಿಂದ ಬಾಗಳಿಯ ಗೌಡಿಕೆಯನ್ನು ಪಡೆದನು. ಈ ಕಂಚಿನಪತ್ರದಲ್ಲಿ ಗೊಲ್ಲರ ಗೋಪಾಲ ಗೌಡನು ಹುಗ್ಗಿ ಹೊಯ್ದು ಬಾಗಳಿ ಸ್ಥಾಪಿಸಿದನೆಂದು ಉಲ್ಲೇಖಿಸಲಾಗಿದೆ. ಬಹುಶಃ ದಾದಯ್ಯನಾಯಕನು ಬಾಗಳಿ ಗೌಡಿಕೆಯನ್ನು ಈ ಗೊಲ್ಲರ ಗೋಪಾಲಗೌಡ ಪಡೆದಿರಬಹುದು.

ಇನ್ನೊಂದು ಮಾಹಿತಿ ಏನೆಂದರೆ, ಈ ದಾದಾ ನಾಯಕನು ಅಲ್ಲಿಯ ಜೋಯಿಸ ಕಾಮಭಟ್ಟರಿಗೆ ಬಾಗಳಿಗೆ ಸೇರಿದ ೩೩ ಹಳ್ಳಿಗಳನ್ನು ಪುರೋಹಿತ ನಿರ್ವಹಿಸಲಿಕ್ಕೆ ದತ್ತಿ ಕೊಟ್ಟಿದ್ದನು. ಈ ವಿಷಯ ಇಂದಿಗೂ ಹರಪನಹಳ್ಳಿ ಭಾಗದಲ್ಲಿ ಪ್ರಚಲಿತವಿದೆ. ಬಾಗಳಿಗೆ ಸೇರಿದ ಈ ೩೩ ಹಳ್ಳಿಗಳ ಹೆಸರುಗಳು ಈ ಕಂಚಿನಪತ್ರದಲ್ಲಿವೆ. ಈ ಕಂಚಿನಪತ್ರದಲ್ಲಿ ಒಂದೆಡೆ ಬಾಗಳಿಗೆ ಸೇರಿದ ೩೩ ಹಳ್ಳಿಗಳ ಸಂಖ್ಯೆಯನ್ನು ತಿಳಿಸಿ ೩೨ ಹಳ್ಳಿಗಳ ಹೆಸರುಗಳನ್ನು ಮಾತ್ರ ಬರೆಯಲಾಗಿದೆ. ೩೩ ಹಳ್ಳಿಗಳು ಬಾಗಳಿಗೆ ಸೇರಿದ ಮಾಹಿತಿ ಈ ಎರಡ ರಲ್ಲೂ ಕಾಣುತ್ತೇವೆ.

ಬಾಗಳಿಯಲ್ಲಿ ಸುಮಾರು ಕ್ರಿ.ಶ. ೧೦ನೇ ಶತಮಾನ ದಿಂದ ೧೬ನೇ ಶತಮಾನದವರೆಗೆ ಸುಮಾರು ೫೦ಕ್ಕೂ ಮೇಲ್ಪಟ್ಟು ಶಿಲಾಶಾಸನಗಳು, ಹಲವಾರು ದೇವಾಲಯ ಗಳು ಮತ್ತು ಮೂರ್ತಿಗಳು ಇರುತ್ತವೆ. ಕೋಗಳಿ-೫೦೦ ನಾಡಿನ ಮಾಸವಾಡಿ–೧೪೧ ರಲ್ಲಿ ಈ ಬಾಗಳಿ ಒಂದು ಗ್ರಾಮವಾಗಿದ್ದಿತೆಂದು ಇಲ್ಲಿಯ ಶಾಸನಗಳಿಂದ ತಿಳಿದುಬರುತ್ತದೆ. ಈ ಗ್ರಾಮಗಳನ್ನು ಶಾಸನಗಳಲ್ಲಿ ಬೂದಗೂಳ, ಬಾಳ್ಗುಳಿ, ಬಾಳಗುಳಿ, ಬಾಗುಳಿ ಮುಂತಾಗಿ ಕರೆಯಲಾಗಿದೆ. ಬಾಗಳಿ ಎಂಬ ಹೆಸರು ತದನಂತರ ಕಾಣುವುದು. ಬಾಗಳಿ ಗ್ರಾಮಕ್ಕೆ ಸೇರಿದ ೩೩ ಹಳ್ಳಿಗಳ ವಿಷಯವು ಸುಮಾರು ಕ್ರಿ. ಶ. ೧೬ನೇ ಶತಮಾನದ ವರೆಗಿನ ಯಾವ ಶಾಸನಗಳಲ್ಲೂ ಕಾಣಸುವು ದಿಲ್ಲ. (ಈ ಹಳ್ಳಿಗಳು ಬಾಗಳಿಯ ಸುತ್ತಮುತ್ತ ಸುಮಾರು ಏಳೆಂಟು ಕಿಲೋ ಮೀಟರ್ ಅಂತರದಲ್ಲಿ ಇಂದಿಗೂ ಇವೆ.)

ಕಂಚಿನಪತ್ರದಲ್ಲಿರುವ ಅಕ್ಷರಗಳ ಶೈಲಿಯು ಇತ್ತೀ ಚಿನ ಕಾಲದ್ದು. ಸುಮಾರು ೭೦ ವರ್ಷಗಳ ಹಿಂದೆ ಬಾಗಳಿಯ ಶ್ರೀ ಬಾರಿಕರ ಹಾಲಪ್ಪರ ಮನೆಯ ವಂಶ ಸ್ಥರಲ್ಲಿ ಈ ಕಂಚಿನಪತ್ರದ ಪಾಠಕ್ರಮವು ಒಂದು ಪೇಪರಿನಲ್ಲಿ ಬರೆಯಲಾಗಿತ್ತು. ತದನಂತರ ಈ ವಂಶಸ್ಥರು ಕಂಚಿನಪತ್ರದಲ್ಲಿ ಬರೆಸಿ ತಮ್ಮಲ್ಲಿ ಇಟ್ಟು ಕೊಂಡರೆಂಬ ವಿಷಯವು ನಿಜಸಂಗತಿ ಎಂದು ತಿಳಿಯು ತ್ತದೆ.

ಇದರಲ್ಲಿ ಬರುವ ಕಾಲಮಾನವನ್ನು ಪರೀಕ್ಷಿಸಿ ದಾಗ ಅದು ಸರಿಯಾಗಿರುವುದು ಕಾಣುತ್ತದೆ. ಆದರೆ ಅದರ ಐತಿಹಾಸಿಕ ಅಂಶಗಳು ಕ್ರಿ. ಶ. ೯ನೇ ಶತಮಾನದ್ದಾಗಿರದೆ ಹರಪನಹಳ್ಳಿ ನಾಯಕರ ಕಾಲಕ್ಕೆ ಸಂಬಂಧಿಸಿದ್ದವಾಗಿವೆ. ಕಂಚಿನಪತ್ರದಲ್ಲಿ ಬರುವ ಆರು ಮನೆತನದ ವೃತ್ತಿದಾರರ ಹೆಸರುಗಳು ತದನಂತರದವು. ಏಕೆಂದರೆ ಈ ಹೆಸರುಗಳ ಬಳಕೆ ಪ್ರಾಚೀನ ಮಧ್ಯಯುಗ

ದಲ್ಲಿ ಕಂಡುಬರುವುದಿಲ್ಲ. ಸುಮಾರು ಕ್ರಿ. ಶ. ೧೦ನೇ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಕೆರೆಯ ವಿಷಯ ಶಾಸನಗಳಲ್ಲಿ ಬರುತ್ತದೆ. ಅದಕ್ಕೆ ಪಿರಿಯಕೆರೆ ಎಂದು ಹೆಸರು. ಇದು ಈ ಕಂಚಿನಪತ್ರದಲ್ಲಿ ಕಾಣುವುದಿಲ್ಲ. ಬಹುಶಃ ಕ್ರಿ.ಶ.೧೬–೧೭ನೇ ಶತಮಾನದಲ್ಲಿ ೨೦೦೦ ನಾಣ್ಯಗಳನ್ನು ಕೊಟ್ಟು ಇಲ್ಲಿಯ ಕೆರೆಯನ್ನು ಜೀರ್ಣೋದ್ಧಾರ ಮಾಡಿರಬೇಕೆಂದು ಕಾಣುತ್ತದೆ. ಇದರಲ್ಲಿ ಕಾಣುವ ಐತಿಹಾಸಿಕ ಅಂಶಗಳು, ವಿವಿಧ ವೃತ್ತಿದಾರರ ಹೆಸರುಗಳು, ಬಾಗಳಿಗೆ ಸೇರಿದ ೩೩ ಹಳ್ಳಿಗಳ ವಿವರ ಮತ್ತು ಕಟ್ಟೆಮನಿಗಳ ಅಸ್ತಿತ್ವ, ವ್ಯವಸ್ಥೆ ಮುಂತಾದವುಗಳನ್ನು ಪರಿಶೀಲಿಸಿದಾಗ ಐತಿಹಾಸಿಕವಾಗಿ ಇವು ಸುಮಾರು ಕ್ರಿ. ಶ. ೧೬–೧೭ನೇ ಶತಮಾನದವಿರಬೇಕೆಂದು ಕಂಡು ಬರುವುವು.